# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು: | ಶ್ರೀ ಎಂ.ಎ. ಗೋಪಾಲಸ್ವಾಮಿ |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 824 |
| ಉತ್ತರಿಸ ಬೇಕಾದ ದಿನಾಂಕ: | 11.03.2020 |
| ಉತ್ತರಿಸುವ ಸಚಿವರು | ವಿ. ಸೋಮಣ್ಣ, ವಸತಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ವಸತಿ ಇಲಾಖೆಯಿಂದ ವಿವಿಧ ಯೋಜನೆಗಳಡಿ ಹಾಸನ ಜಿಲ್ಲೆಗೆ ಕಳೆದ 3 ವರ್ಷಗಳಲ್ಲಿ ಹಂಚಿಕೆಯಾದ ಮನೆಗಳೆಷ್ಟು; ಈ ಮನೆಗಳನ್ನು ಪಡೆದಿರುವ ಫಲಾನುಭವಿಗಳ ಹೆಸರು, ಗ್ರಾಮ, ಹೋಬಳಿ, ತಾಲ್ಲೂಕು ಮತ್ತು ಜಾತಿವಾರು ವಿವರ ನೀಡುವುದು; | ಹಾಸನ ಜಿಲ್ಲೆಗೆ ಕಳೆದ 3 ವರ್ಷಗಳಲ್ಲಿ ವಿವಿಧ ಯೋಜನೆಗಳಡಿ ಒಟ್ಟು 39193 ಮನೆಗಳನ್ನು ಹಂಚಿಕೆ ಮಾಡಲಾಗಿದ್ದು ಫಲಾನುಭವಿ ಹೆಸರು, ಗ್ರಾಮ, ಹೋಬಳಿ, ತಾಲ್ಲೂಕು ಮತ್ತು ಜಾತಿವಾರು ವಿವರಗಳನ್ನು ಅನುಬಂಧ- 1ರಲ್ಲಿ ನೀಡಲಾಗಿದೆ. |
| (ಆ) | ಹಂಚಿಕೆಯಾಗಿರುವ ಮನೆಗಳಿಗೆ ಜನವರಿ-2020ರ ವರೆಗೆ ಬಿಡುಗಡೆಯಾಗಿರುವ ಅನುದಾನವೆಷ್ಟು; ಖರ್ಚಾಗಿರುವ ಅನುದಾನವೆಷ್ಟು; ಅನುದಾನ ಮಂಜೂರಾಗದೇ ಬಾಕಿ ಉಳಿದಿರುವ ಅನುದಾನವೆಷ್ಟು; (ಫಲಾನುಭವಿವಾರು ಹೆಸರು, ಗ್ರಾಮ, ಹೋಬಳಿ, ತಾಲ್ಲೂಕು ಮತ್ತು ಜಾತಿವಾರು ವಿವರ ನೀಡುವುದು) | 2016-17ನೇ ಸಾಲಿನಿಂದ ಜನವರಿ-2020ರವರೆಗೆ ವಿವಿಧ ವಸತಿ ಯೋಜನೆಗಳಡಿ ರೂ.267.37ಕೋಟಿಗಳನ್ನು ಬಿಡುಗಡೆ ಮಾಡಲಾಗಿದ್ದು, ಫಲಾನುಭವಿ ಹೆಸರು, ಗ್ರಾಮ, ಹೋಬಳಿ, ತಾಲ್ಲೂಕು ಮತ್ತು ಜಾತಿವಾರು ವಿವರಗಳನ್ನು ಅನುಬಂಧ-2ರಲ್ಲಿ ನೀಡಲಾಗಿದೆ.<br><br>ಜಿ.ಪಿ.ಎಸ್ ಆಧಾರಿತ ಭೌತಿಕ ಪ್ರಗತಿಗನುಗುಣವಾಗಿ ಹಾಸನ ಜಿಲ್ಲೆಯಲ್ಲಿ ರೂ.27.45ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡಲು ಬಾಕಿ ಇದ್ದು, ಫಲಾನುಭವಿ ಹೆಸರು, ಗ್ರಾಮ, ಹೋಬಳಿ, ತಾಲ್ಲೂಕು ಮತ್ತು ಜಾತಿವಾರು ವಿವರಗಳನ್ನು ಅನುಬಂಧ-3ರಲ್ಲಿ ನೀಡಲಾಗಿದೆ. |
| (ಇ) | ಹಾಸನ ಜಿಲ್ಲೆಯಲ್ಲಿರುವ ನಿರ್ವಸತಿಕರ ಸಂಖ್ಯೆ ಎಷ್ಟು; ಈ ನಿರ್ವಸತಿಗರಿಗೆ ಯಾವ ಕಾಲಮಿತಿಯೊಳಗೆ ವಸತಿ | ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾ) ಅಡಿಯಲ್ಲಿ ಸಾಮಾಜಿಕ ಆರ್ಥಿಕ ಜಾತಿ ಜನಗಣತಿ 2011 ರ ಪಟ್ಟಿಗೆ ಅರ್ಹ ಫಲಾನುಭವಿಗಳನ್ನು ಸೇರಿಸಿ, ಶಾಶ್ವತ ಪಟ್ಟಿಯನ್ನು ತಯಾರಿಸಲು ಕೇಂದ್ರ ಸರ್ಕಾರದ |

| | | |
|---|---|---|
| | ಕಲ್ಪಿಸಲಾಗುವುದು; (ನಿರ್ವಸತಿಕಾರರ ಹೆಸರು, ಗ್ರಾಮ, ಹೋಬಳಿ, ತಾಲ್ಲೂಕು ಮತ್ತು ಜಾತಿವಾರು ವಿವರ ನೀಡುವುದು) | ನಿರ್ದೇಶನದಂತೆ 2018 ರಲ್ಲಿ ರಾಜ್ಯಾದ್ಯಂತ ವಸತಿ ರಹಿತರ ಹಾಗೂ ನಿವೇಶನ ರಹಿತರ ಸಮೀಕ್ಷೆಯನ್ನು ಕೈಗೊಳ್ಳಲಾಗಿರುತ್ತದೆ. ಇದರನ್ವಯ ಹಾಸನ ಜಿಲ್ಲೆಯಲ್ಲಿ ಒಟ್ಟು 57176 ವಸತಿರಹಿತರು ಹಾಗೂ 7373 ನಿವೇಶನರಹಿತರನ್ನು ಒಳಗೊಂಡಂತೆ ಒಟ್ಟು 64549 ನಿರ್ವಸತಿಕರು ಇರುವುದು ಕಂಡು ಬಂದಿರುತ್ತದೆ. ವಸತಿ/ನಿವೇಶನರಹಿತರ ಗ್ರಾಮ, ಹೋಬಳಿ, ತಾಲ್ಲೂಕು ಮತ್ತು ಜಾತಿವಾರು ವಿವರಗಳನ್ನು ಅನುಬಂಧ-4ರಲ್ಲಿ ಲಗತ್ತಿಸಿದೆ.<br><br>ಪ್ರತಿ ವರ್ಷ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಆಯವ್ಯಯದಲ್ಲಿ ಒದಗಿಸಲಾಗುವ ಅನುದಾನಕ್ಕೆ ಅನುಗುಣವಾಗಿ ವಿವಿಧ ವಸತಿ ಯೋಜನೆಗಳಡಿ ವಸತಿರಹಿತರ ಪಟ್ಟಿಯಲ್ಲಿ ಲಭ್ಯವಿರುವ ವಸತಿರಹಿತರಿಗೆ ವಸತಿ ಕಲ್ಪಿಸಲಾಗುತ್ತಿದೆ. |

ವ ಇ 89 ಹೆಚ್‌ಎಂ 2020

(ವಿ.ಸೋಮಣ್ಣ)
ವಸತಿ ಸಚಿವರು